ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಪೌರಾಡಳಿತ ಇಲಾಖೆಯ ಕಾಮಗಾರಿಗಳ ಕುರಿತು

ಶ್ರೀ ರಘುನಾಥ್ ರಾವ್ ಮಲ್ಕಾಪೂರೆ(ವಿಧಾನಸಭೆಯಿಂದ ಚುನಾಯಿತರಾದವರು):-

1068 (1264) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ಜಿಲ್ಲೆಗೆ ಕಳೆದ ಮೂರು ವರ್ಷಗಳಿಂದ ಪೌರಾಡಳಿತ ಇಲಾಖೆಗೆ ಮತ್ತು ಇನ್ನಿತರ ವಿವಿಧ ಲೆಕ್ಕಶೀರ್ಷಿಕೆಗಳ ಅಡಿಯಲ್ಲಿ ಬಂದಿರುವ ಒಟ್ಟು ಅನುದಾನ ಎಷ್ಟು; (ಯೋಜನೆವಾರು, ವರ್ಷವಾರು, ಕಾಮಗಾರಿವಾರು ಸಂಪೂರ್ಣ ಮಾಹಿತಿ ನೀಡುವುದು);

(ಆ) ಹಾಗಿದ್ದಲ್ಲಿ, ಯಾವ ಯಾವ ವಿವಿಧ ಲೆಕ್ಕಶೀರ್ಷಿಕೆಗೆ ಎಷ್ಟೆಷ್ಟು ಹಣ ಬಿಡುಗಡೆಯಾಗಿದೆ; (ಪ್ರತ್ಯೇಕವಾಗಿ ಅಂಕಿ ಅಂಶಗಳೊಂದಿಗೆ ಮಾಹಿತಿ ಒದಗಿಸುವುದು)

(ಇ) ಈ ಲೆಕ್ಕಶೀರ್ಷಿಕೆಗಳ ಅಡಿಯಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ಪ್ರತ್ಯೇಕ ಕಾಮಗಾರಿಗಳಿಗೆ ತಗುಲಿದ ವೆಚ್ಚವೆಷ್ಟು; (ಯೋಜನೆವಾರು/ಕಾಮಗಾರಿವಾರು ಸ್ಪಷ್ಟ ಮಾಹಿತಿ ನೀಡುವುದು)

(ಈ) ಕಾಮಗಾರಿ ಮುಗಿಯದಿದ್ದಲ್ಲಿ, ಕಾಮಗಾರಿ ನಿರ್ವಹಿಸುತ್ತಿರುವ ಗುತ್ತಿಗೆದಾರರ ಹೆಸರು ಹಾಗೂ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಪ್ರತ್ಯೇಕ ಕಾಮಗಾರಿವಾರು/ಕಾಮಗಾರಿಗಳು ಪೂರ್ಣಗೊಳ್ಳದಿರಲು ಕಾರಣಗಳನ್ನೂ,
ಕಾಮಗಾರಿವಾರು/ಸಂಸ್ಥೆಗಳವಾರು/ವರ್ಷವಾರು ಮಾಹಿತಿ ನೀಡುವುದು ?